# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 1274

ಸದಸ್ಯರ ಹೆಸರು : ಶ್ರೀ ಗೋವಿಂದರಾಜು (ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸಬೇಕಾದ ದಿನಾಂಕ : 22-09-2021

ಉತ್ತರಿಸುವ ಸಚಿವರು : ಮಾನ್ಯ ಲೋಕೋಪಯೋಗಿ ಸಚಿವರು.

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಲೋಕೋಪಯೋಗಿ ಇಲಾಖೆಯಲ್ಲಿನ ಕಾಮಗಾರಿಗಳ ಅಂದಾಜು ವೆಚ್ಚವನ್ನು ತಯಾರಿಸುವಾಗ Schedule of Rate (ದರಗಳ ಪಟ್ಟಿ) ಬೆಲೆಯನ್ನು ಆಧರಿಸಿ ಅಂದಾಜು ವೆಚ್ಚವನ್ನು ನಿಗದಿಪಡಿಸಲಾಗುತ್ತಿದೆಯೇ: | ಹೌದು |
| ಆ) | ಹಾಗಿದ್ದಲ್ಲಿ, ಕೆಲವು ಗುತ್ತಿಗೆದಾರರು ಕೆಲವು ಕಾಮಗಾರಿಗಳನ್ನು ಶೇಕಡ 30% ರವರೆವಿಗೂ ಕಡಿಮೆಗೆ ಬಿಡ್ ಮಾಡುತ್ತಿರುವುದು ನಿಜವೆ: | ನಿಜ<br><br>ಒಂದು ವೇಳೆ ಗುತ್ತಿಗೆದಾರರು ಎಸ್.ಆರ್. ದರಕ್ಕೆ ವಿರುದ್ಧವಾಗಿ ಕಡಿಮೆ ದರ ನಮೂದಿಸಿ, ಟೆಂಡರ್ ಪಡೆದಲ್ಲಿ ಗುತ್ತಿಗೆದಾರರಿಂದ ಎಸ್.ಆರ್. ದರಕ್ಕೆ ಸಮನಾದ ದರ ವ್ಯತ್ಯಾಸದ ಮೌಲ್ಯವನ್ನು ಗುತ್ತಿಗೆದಾರರಿಂದ ಭದ್ರತಾ ಠೇವಣಿ ರೂಪದಲ್ಲಿ ಪಡೆದು ಕಾಮಗಾರಿ ವಹಿಸಲಾಗುವುದು.<br><br>ಮುಂದುವರೆದು, ಕಾಮಗಾರಿಗಳನ್ನು ವಹಿಸಿಕೊಳ್ಳುವ ಗುತ್ತಿಗೆದಾರರು ಪ್ರತಿಯೊಂದು ಐಟಂಗಳನ್ನು ವಿಶಿಷ್ಟ ವಿವರಣೆಯಂತೆ (Specification) ನಿರ್ವಹಿಸುವುದು ಕಡ್ಡಾಯವಾಗಿದ್ದು, ಗುಣಮಟ್ಟವನ್ನು ಕಾಯ್ದುಕೊಳ್ಳುವುದು ಕಡ್ಡಾಯವಾಗಿದೆ. |
| ಇ) | ಹಾಗಿದ್ದಲ್ಲಿ, ಗುತ್ತಿಗೆದಾರರಿಂದ ಗುಣಮಟ್ಟದ ಕಾಮಗಾರಿಯನ್ನು ನಿರೀಕ್ಷಿಸಲು ಸಾಧ್ಯವೇ: | |
| ಈ) | ಹಾಗಿದ್ದಲ್ಲಿ, Schedule of Rate (ದರಗಳ ಪಟ್ಟಿ) ಬೆಲೆಗೆ ಇರುವ ಮಹತ್ವವೇನು: (ಸಂಪೂರ್ಣ ಮಾಹಿತಿ ನೀಡುವುದು) | ಲೋಕೋಪಯೋಗಿ ಇಲಾಖೆ ದರಪಟ್ಟಿಗಳಲ್ಲಿ ಪ್ರತಿ ಐಟಂಗಳ ವಿಶಿಷ್ಟ ವಿವರಣೆಗೆ ಅನುಸಾರವಾಗಿ ಡೇಟಾ ದರಗಳನ್ನು ತಯಾರಿಸಿದ್ದು, ಈ ಡೇಟಾ ದರಗಳಂತೆ ಪ್ರತಿ ಐಟಂಗಳ ದರಗಳನ್ನು ನಿರ್ಮಾಣ ಸಾಮಗ್ರಿಗಳ ಮಾರುಕಟ್ಟೆ ದರಗಳನ್ನು ಪರಿಗಣಿಸಿ ಪ್ರತಿ ಐಟಂಗಳ ದರವನ್ನು ನಿಗಧಿಪಡಿಸಲಾಗುತ್ತದೆ. |
| (ಉ) | ಹಾಗಿದ್ದಲ್ಲಿ, ಕಡಿಮೆ ಮೊತ್ತಕ್ಕೆ ಟೆಂಡರ್ ಕರೆಯುವ ಗುತ್ತಿಗೆದಾರರ ಕೆಲಸದ ಗುಣಮಟ್ಟವನ್ನು ಕಾಪಾಡುವ ಬಗ್ಗೆ ಸರ್ಕಾರ ಅನುಸರಿಸುವ ಮಾನದಂಡಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | ಮೇಲೆ ತಿಳಿಸಿದಂತೆ ಗುತ್ತಿಗೆದಾರರು ಕಡಿಮೆ ಮೊತ್ತ ನಮೂದಿಸಿದ್ದಾಗ್ಯೂ ನಿಗಧಿಪಡಿಸಿದ ಕಾಮಗಾರಿಗಳನ್ನು ವಿಶಿಷ್ಟ ವಿವರಣೆಯಂತೆ ನಿರ್ವಹಿಸಬೇಕಿದ್ದು, ಹಣವನ್ನು ಪಾವತಿಸುವಾಗ ಅಗತ್ಯ ಗುಣ ಭರವಸೆ ಪರೀಕ್ಷೆಗೆ ಒಳಪಡಿಸಿ, ಉತ್ತಮ ಫಲಿತಾಂಶ ಬಂದ ನಂತರ ಪಾವತಿಸಲಾಗುವುದು. ಹಾಗೂ ಕಾಮಗಾರಿ ಪೂರ್ಣಗೊಂಡ ನಂತರ ಕನಿಷ್ಠ 1 ವರ್ಷದ ಅವಧಿಯವರೆಗೆ defect liability period ಇರುವುದರಿಂದ ಎಲ್ಲಾ ಕಾಮಗಾರಿಗಳಲ್ಲಿ ಟೆಂಡರ್ ಪ್ರೀಮಿಯಂ ಪರಿಗಣಿಸದೆ (Irrespective of Tender Premium) ಗುಣಮಟ್ಟವನ್ನು ಕಾಯ್ದುಕೊಳ್ಳಲಾಗುತ್ತದೆ. |

ಲೋಇ 79 ಪಿಕ್ಯೂಎನ್ 2021(ಇ)

(ಸಿ.ಸಿ. ಪಾಟೀಲ)
ಲೋಕೋಪಯೋಗಿ ಸಚಿವರು